


# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | 391 (526) |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೆ. ಹರೀಶ್ ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 16-12.2021 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರ್ಮಿಕ ಇಲಾಖೆಯಿಂದ ಕಾರ್ಮಿಕರಿಗೆ ಆಹಾರ ಪೊಟ್ಟಣ (ಫುಡ್ ಕಿಟ್) ಹಂಚಿಕೆ ಸಂಬಂಧಿಸಿದಂತೆ, ಪ್ರತಿ ಕಿಟ್ ಗೆ ನಿಗದಿಪಡಿಸಲಾದ ಬೆಲೆ ಎಷ್ಟು? | • ಕರ್ನಾಟಕ ಕಟ್ಟಡ ಮತ್ತು ಇತರ ನಿರ್ವಹಣಾ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ವಿತರಿಸಲಾಗಿರುವ ಪ್ರತಿ ಫುಡ್ ಕಿಟ್ ನ ಬೆಲೆ ರೂ.835/- (ತೆರಿಗೆಗಳು ಹೊರತುಪಡಿಸಿ)ಗಳಾಗಿರುತ್ತದೆ. ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯಿಂದ ಪ್ರತಿ ಕಿಟ್ ಗೆ 5 ಕೆ.ಜಿ. ಅಕ್ಕಿಯನ್ನು ಪ್ರತಿ ಕೆ.ಜಿಗೆ ರೂ.20.35 ದರದಂತೆ ಒಟ್ಟು ರೂ.101.75 ಮೊತ್ತದಲ್ಲಿ ಖರೀದಿಸಿ ವಿತರಿಸಲಾಗಿರುತ್ತದೆ.<br>• ಕರ್ನಾಟಕ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ವತಿಯಿಂದ ಅಸಂಘಟಿತ ಕಾರ್ಮಿಕರಿಗೆ ವಿತರಿಸಿದ ಪ್ರತಿ ಫುಡ್ ಕಿಟ್ ನ ಬೆಲೆ ರೂ.573/- (ತೆರಿಗೆಗಳು ಹೊರತುಪಡಿಸಿ)ಗಳಾಗಿರುತ್ತದೆ. ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯಿಂದ ಪ್ರತಿ ಕಿಟ್ ಗೆ 10 ಕೆ.ಜಿ. ಅಕ್ಕಿಯನ್ನು ಪ್ರತಿ ಕೆ.ಜಿ.ಗೆ ರೂ.20.35 ದರದಂತೆ ಒಟ್ಟು ರೂ.203.50 ಮೊತ್ತದಲ್ಲಿ ಖರೀದಿಸಿ ವಿತರಿಸಲಾಗಿರುತ್ತದೆ. |
| ಆ) | ಇದುವರೆಗೆ ಎಷ್ಟು ಮಂದಿ ಕಾರ್ಮಿಕರಿಗೆ ಫುಡ್ ಕಿಟ್ ಹಂಚಿಕೆ ಮಾಡಲಾಗಿದೆ? ಸರ್ಕಾರದಿಂದ ಮಂಜೂರಾದ ಒಟ್ಟು ಅನುದಾನ ಎಷ್ಟು? ಇದುವರೆಗೆ ಖರ್ಚಾದ ಅನುದಾನವೆಷ್ಟು? (ಸಂಪೂರ್ಣ ವಿವರದೊಂದಿಗೆ ಮಾಹಿತಿ ಒದಗಿಸುವುದು). | • ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ ಕಾರ್ಮಿಕ ಇಲಾಖೆಯ ಅಧಿಕಾರಿಗಳ ಮೂಲಕ ರೂ.23.42 ಲಕ್ಷ ಫುಡ್ ಕಿಟ್ ಗಳನ್ನು ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರಿಗೆ ವಿತರಿಸಲಾಗಿದೆ.<br>• ಸದರಿ ಆಹಾರ ಕಿಟ್ ಗಳಿಗಾಗಿ ರೂ.227.41 ಕೋಟಿ ಮೊತ್ತವನ್ನು ಖರ್ಚು ಮಾಡಲಾಗಿದೆ. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಲಭ್ಯವಿರುವ ಕಾರ್ಮಿಕ ಸುಂಕ ನಿಧಿಯಿಂದ ಆಹಾರ ಕಿಟ್ ಗಳನ್ನು ಖರೀದಿಸಿ ವಿತರಿಸಲಾಗಿರುತ್ತದೆ. ಸರ್ಕಾರದಿಂದ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ. |

| | | |
|---|---|---|
| | | • ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ವತಿಯಿಂದ ಕಾರ್ಮಿಕ ಇಲಾಖೆಯ ಅಧಿಕಾರಿಗಳ ಮೂಲಕ ಇದುವರೆಗೂ 3.80 ಲಕ್ಷ ಫುಡ್ ಕಿಟ್ ಗಳನ್ನು ಅಸಂಘಟಿತ ಕಾರ್ಮಿಕರಿಗೆ ವಿತರಿಸಲಾಗಿದೆ. ಸದರಿ ಆಹಾರ ಕಿಟ್ ಗಳಿಗಾಗಿ ರೂ.30.56 ಕೋಟಿಯಷ್ಟು ಮೊತ್ತವನ್ನು ಖರ್ಚು ಮಾಡಲಾಗಿದೆ.<br>• ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಕಾರ್ಮಿಕರಿಗೆ ಆಹಾರ ಕಿಟ್ ಗಳನ್ನು ವಿತರಿಸಲು ಸರ್ಕಾರದ ನಿರ್ದೇಶನದಂತೆ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಲಭ್ಯವಿರುವ ಕಾರ್ಮಿಕ ಸುಂಕ ನಿಧಿಯಿಂದ ಆಹಾರ ಕಿಟ್ ಗಳನ್ನು ಖರೀದಿಸಿ ವಿತರಿಸಲಾಗಿತ್ತು. ತದನಂತರ, ಸರ್ಕಾರದಿಂದ ರೂ.30.56 ಕೋಟಿಯಷ್ಟು ಮೊತ್ತ ಮಂಡಳಿಗೆ ಬಿಡುಗಡೆಯಾಗಿರುತ್ತದೆ. |

**ಕಾಇ 534 ಎಲ್ ಇ ಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು.